


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 23-03-2021 ಪ್ರಶ್ನೆ ಸಂಖ್ಯೆ : 263(1909)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎಂ. ಎ. ಗೋಪಾಲಸ್ವಾಮಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 23-03-2021

ಉತ್ತರಿಸುವ ಸಚಿವರು: ಸಹಕಾರ ಸಚಿವರು

ವಿಷಯ : ನಂದಿನಿ ಹೈಟೆಕ್ ಉತ್ಪನ್ನ ಘಟಕದಲ್ಲಿರುವ ಕಾರ್ಮಿಕರ ಬಗ್ಗೆ

(ಅ) ಹಾಸನ ಜಿಲ್ಲೆ ಚನ್ನರಾಯಪಟ್ಟಣ ತಾಲ್ಲೂಕಿನ ಶೆಟ್ಟಿಹಳ್ಳಿ ಗ್ರಾಮದಲ್ಲಿ ಕಾರ್ಯನಿರ್ವಹಿಸುತ್ತಿರುವ ನಂದಿನಿ ಹೈಟೆಕ್ ಉತ್ಪನ್ನ ಘಟಕಕ್ಕೆ ಕಳೆದ ಮೂರು ವರ್ಷಗಳಲ್ಲಿ ಎಷ್ಟು ಕಾರ್ಮಿಕರನ್ನು ಹೊರಗುತ್ತಿಗೆ ಮೂಲಕ ನೇಮಿಸಿಕೊಳ್ಳಲಾಗಿದೆ; ಯಾವ ಏಜೆನ್ಸಿ ಮೂಲಕ ಈ ಕಾರ್ಮಿಕರನ್ನು ನೇಮಿಸಿಕೊಳ್ಳಲಾಗಿದೆ; (ವಿವರ ನೀಡುವುದು)

(ಆ) ನಂದಿನಿ ಹೈಟೆಕ್ ಉತ್ಪನ್ನ ಘಟಕದಿಂದ ಪ್ರತಿ ಕಾರ್ಮಿಕರಿಗೆ ಪಾವತಿಸುತ್ತಿರುವ ಸಂಬಳವೆಷ್ಟು; ಇದರಲ್ಲಿ ಹೊರಗುತ್ತಿಗೆ ಪಡೆದಿರುವ ಏಜೆನ್ಸಿಯು ಕಾರ್ಮಿಕರಿಗೆ ಪಾವತಿಸುವುದೆಷ್ಟು; ಈ ಘಟಕ ಮತ್ತು ಏಜೆನ್ಸಿ ನಡುವೆ ಆಗಿರುವ ಒಡಂಬಡಿಕೆಗಳೇನು; ಯಾವ ನಿಯಮಗಳಡಿ ಈ ಕಾರ್ಮಿಕರನ್ನು ನೇಮಿಸಿಕೊಳ್ಳಲಾಗಿದೆ; ಈ ಏಜೆನ್ಸಿಯು ಸರ್ಕಾರದ ನಿಯಮಗಳನ್ವಯ ಕಾರ್ಯನಿರ್ವಹಿಸುತ್ತಿದೆಯೇ; (ದಾಖಲೆಗಳ ಸಹಿತ ವಿವರ ನೀಡುವುದು)

(ಇ) ಈ ಡೈರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಹೊರಗುತ್ತಿಗೆ ಕಾರ್ಮಿಕರಿಗೆ ಹೊರಗುತ್ತಿಗೆ ಪಡೆದಿರುವ ಏಜೆನ್ಸಿಯು ನಿಯಮಾನುಸಾರ ಕಾಲ ಕಾಲಕ್ಕೆ ಸಂಬಳ ಮತ್ತು ಪಿ.ಎಫ್ ಪಾವತಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇದಕ್ಕೆ ನಂದಿನಿ ಹೈಟೆಕ್ ಉತ್ಪನ್ನ ಘಟಕದ ಅಧಿಕಾರಿಗಳು ಕಾರಣರೇ ಅಥವಾ ಹೊರಗುತ್ತಿಗೆ ಪಡೆದಿರುವ ಏಜೆನ್ಸಿ ಕಾರಣವೇ? (ಮಾಹಿತಿ ನೀಡುವುದು)